


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 29-03-2021 ಪ್ರಶ್ನೆ ಸಂಖ್ಯೆ : 1995 (2343)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 29-03-2021

ಉತ್ತರಿಸುವ ಸಚಿವರು: ಪ್ರವಾಸೋದ್ಯಮ ಮತ್ತು ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು

ವಿಷಯ : ರಾಜ್ಯದ ಸಮುದ್ರ ತೀರ ಮತ್ತು ನದಿ ಭಾಗಗಳಲ್ಲಿ ನಡೆಸುತ್ತಿರುವ ವಾಟರ್ ಗೇಮ್ಸ್‌ಗಳ ಬಗ್ಗೆ

(ಅ) ರಾಜ್ಯದ ಯಾವ ಯಾವ ಸಮುದ್ರ ತೀರ ಮತ್ತು ನದಿ ಭಾಗಗಳಲ್ಲಿ ವಾಟರ್ ಗೇಮ್ಸ್‌ಗಳನ್ನು ನಡೆಸಲು ಅನುಮತಿ ನೀಡಲಾಗುತ್ತಿದೆ; ಇಲ್ಲಿ ಯಾವ ಯಾವ ಕ್ರೀಡೆಗಳನ್ನು ನಡೆಸಲು ಮತ್ತು ಯಾವ ಯಾವ ಏಜೆನ್ಸಿ/ಕಂಪನಿಗಳಿಗೆ ಎಷ್ಟು ವರ್ಷಗಳಿಗೆ ಅನುಮತಿ ನೀಡಲಾಗಿದೆ ; (ಆದೇಶ ಸಹಿತ ಪ್ರಕರಣವಾರು ವಿವರ ನೀಡುವುದು)

(ಆ) ಈ ಸಾಹಸ ಕ್ರೀಡೆಗಳನ್ನು ನಡೆಸುವ ಏಜೆನ್ಸಿ/ಕಂಪನಿಗಳನ್ನು ಆಯ್ಕೆ ಮಾಡಲು ಟೆಂಡರ್‌ಗಳನ್ನು ಕರೆಯಲಾಗುತ್ತಿದೆಯೇ ಅಥವಾ ಬೇರೆ ಯಾವುದಾದರೂ ಮಾನದಂಡಗಳ ಮೇಲೆ ಆಯ್ಕೆ ಮಾಡಲಾಗುತ್ತಿದೆಯೇ; ಇದಕ್ಕೆ ಅನುಮತಿ ನೀಡಲು ಸರ್ಕಾರವು ನಿಗದಿಪಡಿಸಿರುವ ಮಾನದಂಡಗಳೇನು ; (ಆದೇಶ ಸಹಿತ ವಿವರ ನೀಡುವುದು)

(ಇ) ಇಲ್ಲಿ ನಡೆಸುವಂತಹ ಕ್ರೀಡೆಗಳಿಗೆ ದರಗಳನ್ನು ನಿಗದಿ ಮಾಡಲಾಗಿದೆಯೇ; ಮಾಡಿದ್ದಲ್ಲಿ, ಅವುಗಳ ವಿವರ ನೀಡುವುದು;

(ಈ) ಕಾಳಿ ನದಿಯ ತೀರದಲ್ಲಿ ಇರುವ ಹೋಟೆಲ್ ಮತ್ತು ರೆಸಾರ್ಟ್‌ಗಳು ಅಕ್ರಮವಾಗಿ ಇಂತಹ ಕ್ರೀಡೆಗಳನ್ನು ನಡೆಸುತ್ತಿದ್ದು ಸಾರ್ವಜನಿಕರಿಂದ ಬೇಕಾಬಿಟ್ಟಿಯಾಗಿ ಹಣ ವಸೂಲಿ ಮಾಡುತ್ತಿರುವುದು ಮತ್ತು ಸುರಕ್ಷತಾ ಕ್ರಮಗಳನ್ನು ಕೈಗೊಳ್ಳದೇ ಇದನ್ನೇ ದಂಧೆ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಅವರುಗಳಿಗೆ ಸರ್ಕಾರದಿಂದ ಅನುಮತಿ/ಪರವಾನಗಿ ನೀಡಲಾಗಿದೆಯೇ; ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು ; (ವಿವರ ನೀಡುವುದು)

(ಊ) ಇಂತಹ ಕ್ರೀಡೆಗಳನ್ನು ನಡೆಸುವವರಿಗೆ ಸರ್ಕಾರ ನೀಡುತ್ತಿರುವ ಸವಲತ್ತುಗಳೇನು ಮತ್ತು ಈ ಕ್ರೀಡೆಗಳಿಗೆ ಅನುಮತಿ ನೀಡಿರುವುದರಿಂದ ಕಳೆದ 3 ವರ್ಷಗಳಲ್ಲಿ ಸರ್ಕಾರಕ್ಕೆ ಬಂದಿರುವ ಆದಾಯವೆಷ್ಟು ? (ವಿವರ ನೀಡುವುದು)